## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2127

ಸದಸ್ಯರ ಹೆಸರು : ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 25.03.2021

ಉತ್ತರಿಸಬೇಕಾದ ಸಚಿವರು : ಮಾನ್ಯ ಮುಖ್ಯಮಂತ್ರಿರವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಅನೇಕ ಜನರು ಅಕ್ರಮವಾಗಿ ಸರ್ಕಾರಿ ಜಾಗಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ಅವರುಗಳ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಅನೇಕ ಜನರು ಅಕ್ರಮವಾಗಿ ಸರ್ಕಾರಿ ಜಾಗಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಪ್ರಾಧಿಕಾರದಿಂದ ಭೂಸ್ವಾಧೀನಪಡಿಸಿಕೊಂಡು ಬಡಾವಣೆ ರಚನೆ ಮಾಡಲು ಸಾಧ್ಯವಾಗದಿರುವ ವಸತಿ ನಿವೇಶನಗಳಲ್ಲಿ ದಿನಾಂಕ:28.05.2008 ಕ್ಕಿಂತ ಹಿಂದಿನಿಂದಲೂ ಅನಧಿಕೃತವಾಗಿ ಮನೆ ಕಟ್ಟಿಕೊಂಡು ವಾಸವಿರುವಂತಹ ಮನೆಗಳನ್ನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಂವ್ಯಶಾಇ 52 ಶಾಸನ 2016, ದಿನಾಂಕ:28.05.2020 (ಕರ್ನಾಟಕ ಅಧ್ಯಾದೇಶ ಸಂಖ್ಯೆ 10), ಸುಗ್ರೀವಾಜ್ಞೆ ಅನ್ವಯ ನಿಗಧಿತ ದರವನ್ನು ಪಾವತಿಸಿಕೊಂಡು ಸಕ್ರಮಗೊಳಿಸಲು ಕ್ರಮಕೈಗೊಳ್ಳಲಾಗಿದೆ. ಕೋವಿಡ್-19 ಮಹಾಮಾರಿ ಹಿನ್ನಲೆಯಲ್ಲಿ, ಮಾಡಲಾದ ಲಾಕ್‌ಡೌನ್ ಮತ್ತು ತದನಂತರದ ಪರಿಣಾಮಗಳಿಂದಾಗಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶದಂತೆ ದಿನಾಂಕ:24.03.2020 ರಿಂದ 31.01.2021 ರವರೆಗೆ ಯಾವುದೇ ಅನಧಿಕೃತ ನಿರ್ಮಾಣಗಳನ್ನು ನೆಲಸಮಗೊಳಿಸುವುದನ್ನು ನಿರ್ಬಂಧಿಸಲಾಗಿತ್ತು. ಆದುದರಿಂದ ಕಟ್ಟಡ ತೆರವು ಕಾರ್ಯಾಚರಣೆ ಕೈಗೊಂಡಿರುವುದಿಲ್ಲ. ಅಕ್ರಮವಾಗಿ ಸರ್ಕಾರಿ ಜಾಗದಲ್ಲಿ ಮನೆಗಳನ್ನು ನಿರ್ಮಿಸಿರುವಂತಹ ಪ್ರಕರಣಗಳನ್ನು ಗುರುತಿಸಿ ಅಂತಹ ಅಕ್ರಮ ಮನೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯಿದೆ-1976 ರ ಸೆಕ್ಷನ್ 33(1) ರಂತೆ ನೋಟೀಸ್ ಜಾರಿ ಮಾಡಿ ಸೆಕ್ಷನ್ 33(2) ರನ್ವಯ ಅನಧಿಕೃತ ಕಟ್ಟಡಗಳನ್ನು ನೆಲಸಮಗೊಳಿಸಲಾಗುತ್ತಿದೆ ಹಾಗೂ ಇದೇ ಕಾಯಿದೆಯ ಸೆಕ್ಷನ್ 33(A)(1) ಮತ್ತು (2) ರಂತೆ ಒತ್ತುವರಿದಾರರನ್ನು 3 ವರ್ಷಗಳ ಜೈಲು ಶಿಕ್ಷೆಗೆ ಒಳಪಡಿಸಲು ಸ್ಥಳೀಯ ಪೊಲೀಸ್ ಠಾಣೆಗಳಲ್ಲಿ FIR ದಾಖಲಿಸಲಾಗುತ್ತಿದೆ. |
| ಆ | ಬಿಡಿಎ ವ್ಯಾಪ್ತಿಯಲ್ಲಿ ಅನೇಕ ಜನರು ಬಿ.ಡಿ.ಎ ಪ್ಲಾನಿಂಗ್ ನಲ್ಲಿ (ನಕ್ಷೆ) ರಸ್ತೆ ಇದ್ದರೂ ಆ ಜಾಗದಲ್ಲಿ ಮನೆಗಳನ್ನು ನಿರ್ಮಾಣ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಅವರುಗಳ ವಿರುದ್ಧ ಕೈಗೊಂಡ ಕ್ರಮಗಳೇನು? | ಬೆಂಗಳೂರು ನಗರ ಯೋಜನಾ ಪ್ರದೇಶದ ಅಭಿವೃದ್ಧಿಗಾಗಿ ಅನುಮೋದಿತ Revised Master Plan-2015 ರ ನಕ್ಷೆಯಲ್ಲಿ ರಸ್ತೆಗಳ ಮಾರ್ಗಗಳನ್ನು ತೋರಿಸಲಾಗಿರುತ್ತದೆ. RMP ಅಧಿಸೂಚನೆಗಿಂತ ಮುಂಚಿತವಾಗಿ ನಿರ್ಮಾಣವಾದ ಪ್ರದೇಶದಲ್ಲಿ ರಸ್ತೆಗಳನ್ನು ನಿರ್ಮಿಸಲು ಜಮೀನುಗಳನ್ನು ಹಾಗೂ ಅದರಲ್ಲಿ ಕಟ್ಟಡಗಳಿದ್ದಲ್ಲಿ ಅವುಗಳ ಸಮೇತ ಭೂಸ್ವಾಧೀನಪಡಿಸಿಕೊಂಡು ನಿರ್ಮಿಸಬೇಕಾಗುತ್ತದೆ. ಭೂಸ್ವಾಧೀನ ವೆಚ್ಚ ಮತ್ತು ಕಾಮಗಾರಿ ವೆಚ್ಚ ಎರಡನ್ನೂ ಭರಿಸಿ ಪ್ರಾಧಿಕಾರದಿಂದ RMP ರಸ್ತೆಗಳನ್ನು ನಿರ್ಮಿಸಲು ಸಾಧ್ಯವಾಗಿರುವುದಿಲ್ಲ. ಉದ್ದೇಶಿತ ಯೋಜನಾ ರಸ್ತೆ ಜಾಗದಲ್ಲಿ ಮನೆ ನಿರ್ಮಿಸಲು ಯಾವುದೇ ನಕ್ಷೆ ಮಂಜೂರಾತಿ ನೀಡಲಾಗುತ್ತಿಲ್ಲ. |

ನಅಇ 68 ಬೆಂಅಸೇ 2021

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿಗಳು